ಒಂದಾಣೆ ಮಾಲೆ 227

ಕಾಳಿದಾಸನ

# ಮಾಲವಿಕಾಗ್ನಿಮಿತ್ರ

(ಭಾಗ ೧)




ಲೇಖಕರು:

ಶ್ರೀ ಈಳಂತೋಡಿ ರಾಮಕೃಷ್ಣ ಭಟ್ಟ,

ರಾಮಕೃಷ್ಣ ಮಿಶನ್, ಮಂಗಳೂರು.





1959

ಬೆಲೆ: ಒಂದಾಣೆ.

ಒಂದಾಣೆ ಮಾಲೆ — ಮಂಗಳೂರು.

# ಟಿಪ್ಪಣಿ.

೧. "ವಿಷ್ಕಂಭ": ಹಿಂದೆ ನಡೆದುಹೋದ ಅಥವಾ ಮುಂದೆ ನಡೆಯಲಿರುವ ಕಥಾಭಾಗವನ್ನು ಕೆಲವು ಪಾತ್ರಗಳ ಸಂಭಾಷಣೆಯ ಮೂಲಕ ಸಂಕ್ಷೇಪವಾಗಿ ವಿವರಿಸುವ ನಾಟಕದ ಭಾಗಕ್ಕೆ ವಿಷ್ಕಂಭ ವೆಂದು ಹೆಸರು. ಇದು ಯಾವುದಾದರೂ ಅಂಕದ ಆದಿಯಲ್ಲಿ ಮಾತ್ರ ಬರುವುದು. ಉಚ್ಚ ಮತ್ತು ನೀಚ ಪಾತ್ರಗಳಿಂದೊಡಗೂಡಿದರೆ ಅದು ಮಿಶ್ರವಿಷ್ಕಂಭವೆನಿಸುವುದು.

೨. "ಉಪದೇಶದರ್ಶನ": ಶಿಷ್ಯರಿಂದ ನಾಟ್ಯ ಪ್ರದರ್ಶನ.

೩. "ಕತಕ": ನೀರನ್ನು ಶುದ್ಧಗೊಳಿಸಲು ಕತಕವೆಂಬ ಬೀಜವನ್ನು ಉಪಯೋಗಿಸುತ್ತಿದ್ದರು.

೪. "ವೈತಾಳಿಕ": ಹಾಡು ಸಂಗೀತಗಳ ಮೂಲಕ ರಾಜನನ್ನು ಎಚ್ಚರಿಸುವ ಮತ್ತು ಸಮಯದ ಜ್ಞಾನವನ್ನು ಮಾಡಿಕೊಡುವ ಪರಿಚಾರಕನು.

೫. "ಪ್ರವೇಶಕ": ಇದು ವಿಷ್ಕಂಭದಂತಹದೇ ಒಂದು ಭಾಗ. ಆದರೆ ಇದರಲ್ಲಿ ಯಾವಾಗಲೂ ನೀಚ ಪಾತ್ರಗಳು ಮಾತ್ರವೇ ಬರುತ್ತವೆ ಮತ್ತು ಮೊದಲನೆಯ ಅಂಕದಲ್ಲಿ ಪ್ರವೇಶಕವಿರಬಾರದು.

೬. "ದೋಹದ": ಈ ಪದದ ನಿಜವಾದ ಅರ್ಥ 'ಗರ್ಭಿಣಿಯರ ಬಯಕೆ'. ಸಸ್ಯಗಳು ಫಲಿಸದೆ ಹೋದರೆ—ಅಶೋಕ ಮರಕ್ಕಾದರೆ ಅಲಂಕೃತಳಾದ ಸ್ತ್ರೀಯ ಪಾದಸ್ಪರ್ಶದಿಂದಲೂ, ಇತರ ವೃಕ್ಷಗಳಿಗೆ ಬೇರೆ ನಿರ್ದಿಷ್ಟ ವಿಧಗಳಿಂದಲೂ—ದೋಹದವನ್ನು ಪೂರೈಸಿದರೆ ಫಲಿಸುವುವು ಎಂದು ಅಂದಿನ ಕಾಲದ ಒಂದು ನಂಬಿಕೆ.

# ಕಾಳಿದಾಸನ

# ಮಾಲವಿಕಾಗ್ನಿಮಿತ್ರ

## ಕಥಾರಚನೆ

(ಭಾಗ ೧)

ಒಂದನೆಯ ಅಂಕ

ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ
ಯಃ ಸ್ವಯಂ ಕೃತ್ತಿವಾಸಾಃ
ಕಾಂತಾಸಮ್ಮಿಶ್ರದೇಹೋಽಪ್ಯವಿಷಯಮನಸಾಂ
ಯಃ ಪರಸ್ತಾದ್ಯತೀನಾಮ್ ।
ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿ-
ರ್ಬಿಭ್ರತೋ ನಾಭಿಮಾನಃ
ಸನ್ಮಾರ್ಗಾಲೋಕನಾಯ ವ್ಯಪನಯತು ಸ ವ-
ಸ್ತಾಮಸೀಂ ವೃತ್ತಿಮೀಶಃ ॥

ತ್ರಿಲೋಕನಾಥನೂ ಭಕ್ತಾಭೀಷ್ಟಪ್ರದನೂ ಆಗಿದ್ದರೂ ಚರ್ಮವಸ್ತ್ರನಾದ, ಕಾಂತಾಸಮ್ಮಿಶ್ರದೇಹನಾದರೂ ವಿರಕ್ತಯೋಗಿಗಳಿಗೆ ಪರಮಗುರುವಾದ, ಅಷ್ಟಮೂರ್ತಿಗಳಿಂದ ಜಗದಾಧಾರಕನಾಗಿದ್ದರೂ ಅಭಿಮಾನಶೂನ್ಯನಾದ ಆ ಈಶ್ವರನು ನಿಮ್ಮ ತಾಮಸೀವೃತ್ತಿಗಳನ್ನು ಕಳೆಯಲಿ ಎಂಬ ನಾಂದಿಯೊಡನೆ ನಾಟಕವು ಆರಂಭವಾಗುವುದು.

ಮೊದಲಾಗಿ ಸೂತ್ರಧಾರನು ಪಾರಿಪಾರ್ಶ್ವಕನನ್ನು ಕರೆದು, "ಶ್ರೀ ಕಾಳಿದಾಸಪ್ರಣೀತವಾದ ಮಾಲವಿಕಾಗ್ನಿಮಿತ್ರವೆಂಬ ನಾಟಕವನ್ನು ವಸಂತೋತ್ಸವದ ಈ ಸಂದರ್ಭದಲ್ಲಿ ಅಭಿನಯಿಸಬೇಕು" ಎನ್ನುವನು. "ಭಾಸಸೌಮಿಲ್ಲಕ ಕವಿಪುತ್ರ ಮೊದಲಾದ ಪ್ರಸಿದ್ಧ ಕವಿಗಳನ್ನುಳಿದು, ವರ್ತ

ಮಾನ ಕವಿಯಾದ ಕಾಳಿದಾಸನ ಕೃತಿಯನ್ನು ಸಭಾಸದರು ಹೇಗೆ ಆದರಿಸುವರು?" ಎಂದು ಆಗ ಪಾರಿಪಾರ್ಶ್ವಕನು ಪ್ರಶ್ನಿಸಲು, ಸೂತ್ರಧಾರನು, "ನೀನು ವಿವೇಕಶೂನ್ಯನು" ಎಂದು ಹೇಳಿ ಹೀಗೆ ವಿವರಿಸುತ್ತಾನೆ—"ಹಳೆಯ ಕಾವ್ಯಗಳೆಲ್ಲವೂ ಒಳ್ಳೆಯದೆಂದಲ್ಲ; ಅಥವಾ ಹೊಸತೆಲ್ಲವೂ ಕೆಟ್ಟದೆಂದೂ ಅಲ್ಲ. ಸಜ್ಜನರು ಪರೀಕ್ಷಿಸಿ ಒಳ್ಳೆಯದನ್ನು ಒಪ್ಪುತ್ತಾರೆ; ಮೂಢನಾದವನಿಗೆ ಪರರಿಂದ ಎರವಲು ತಂದ ಬುದ್ಧಿ ಮಾತ್ರವೇ ಇರುವುದು." ಆ ಮೇಲೆ, 'ದೇವಿ ಧಾರಿಣಿಯ ಪರಿಚಾರಿಕೆಯಂತೆ ತಾನೂ ಪಂಡಿತಪರಿಷತ್ತಿನ ಆಜ್ಞೆಯನ್ನು ಪೂರೈಸಬಯಸುತ್ತೇನೆ' ಎಂಬ ಸೂತ್ರಧಾರನ ಮಾತಿನಿಂದ ಪಾತ್ರವೊಂದನ್ನು ಪರಿಚಯಮಾಡಿಕೊಡುವುದರೊಂದಿಗೆ ಪ್ರಸ್ತಾವನೆಯು ಮುಗಿಯುತ್ತದೆ.

ಆರ್ಯಗಣದಾಸನ ಶಿಷ್ಯೆಯಾದ ಮಾಲವಿಕೆಯು 'ಛಲಿತ'ವೆಂಬ ನಾಟ್ಯದಲ್ಲಿ ಹೇಗಿರುವಳೆಂದು ಪ್ರಶ್ನಿಸಲು ದೇವಿಯಿಂದ ಕಳುಹಿಸಲ್ಪಟ್ಟ ಬಕುಲಾವಲಿಕೆಯನ್ನು ಆ ಮೇಲೆ ನಾವು ಕಾಣುತ್ತೇವೆ. ಅವಳು ಹೀಗೆ ಹೋಗುತ್ತಿರಲು ಸರ್ಪಮುದ್ರಿತವಾದ ಅತಿ ಮನೋಹರವಾದ ಉಂಗುರವೊಂದನ್ನು ಶಿಲ್ಪಿಯ ಬಳಿಯಿಂದ ಧಾರಿಣಿಯ ಬಳಿಗೆ ಕೊಂಡೊಯ್ಯುವ ಕೌಮುದಿಕೆಯನ್ನು ಸಂಧಿಸುವಳು. ಸ್ವಲ್ಪ ಹೊತ್ತು ಯೋಗಕ್ಷೇಮ ಮಾತನಾಡುತ್ತಿದ್ದು ಪರಿಚಾರಿಕೆಯರಿಬ್ಬರೂ ತಮ್ಮ ತಮ್ಮ ಹಾದಿ ಹಿಡಿಯುವರು. ಮುಂದೆ ಹೋಗುತ್ತಾ, ಬಕುಲಾವಲಿಕೆ ಸಂಗೀತಶಾಲೆಯಿಂದ ಬರುತ್ತಿರುವ ಗಣದಾಸನನ್ನು ಕಂಡು ವಿಚಾರವಿನಿಮಯಮಾಡಿಕೊಂಡು ತೆರಳುವಳು. ಇಲ್ಲಿಗೆ ಮಿಶ್ರವಿಷ್ಕಂಭವು ಮುಗಿಯುವುದು.

ಈ ವಿಷ್ಕಂಭದಲ್ಲಿ ವ್ಯಕ್ತಗೊಂಡ ಕಥಾಭಾಗವು ಹೀಗಿದೆ:—ಸೌಂದರ್ಯನಿಧಿಯಾದ ಮಾಲವಿಕೆಯನ್ನು ರಾಣಿ ಧಾರಿಣಿಗೆ ಆಕೆಯ (ನೀಚವರ್ಣದ) ಸಹೋದರನಾದ ವೀರಸೇನನು ಉಡುಗೊರೆಯಾಗಿ ಕಳುಹಿಸಿಕೊಟ್ಟಿದ್ದನು. ದೇವಿಯ ಸೇವಕಿಯಾದ ಆಕೆ ನಾಟ್ಯಾಚಾರ್ಯನಾದ ಗಣದಾಸನ ಶಿಷ್ಯೆಯಾಗಿದ್ದು, ತುಂಬಾ ಪ್ರಾವೀಣ್ಯವನ್ನು ಪಡೆದಿದ್ದಳು. ಅಂತಃಪುರದ ಸ್ತ್ರೀಯರಲ್ಲೊಬ್ಬಳೂ ಹರದತ್ತನ ಶಿಷ್ಯೆಯೂ ಆದ ಇರಾವತಿಯನ್ನೂ ಕೂಡ ಮೀರಿಸುವಂತಿದ್ದಳು. ಹೀಗಿರಲು, ಒಂದು ದಿನ ಚಿತ್ರಶಾಲೆಯಲ್ಲಿ ವರ್ಣರಂಜಿತವಾದ ಚಿತ್ರವೊಂದನ್ನು ಧಾರಿಣಿಯು ನೋಡುತ್ತಿರಲು, ರಾಜನಾದ

ಅಗ್ನಿಮಿತ್ರನು ಬಂದು, ಪತ್ನಿಯೊಂದಿಗೆ ಏಕಾಸನೋಪವಿಷ್ಟನಾಗಿ ಧಾರಿಣಿಯ ಅತಿಸಮೀಪದಲ್ಲಿ ಚಿತ್ರಿತಳಾದ ಸೇವಕಿಯಿಂದ ಆಕರ್ಷಿತನಾಗಿ, ಅದು ಯಾರೆಂದು ಕೇಳಿದನು. ರಾಣಿಯು ಉತ್ತರಿಸದಿರಲು, ರಾಜನ ಕುತೂಹಲವು ಹೆಚ್ಚಾಗಿ ಪುನಃ ಪುನಃ ಕೇಳಿದನು. ಆಕೆ ಹೇಳದಿರಲು, ಆಕೆಯ ತಂಗಿ ವಸುಲಕ್ಷ್ಮಿ 'ಈಕೆ ಮಾಲವಿಕೆ' ಎಂದು ಹೇಳಿದಳು. ಆ ತರುವಾಯ ಮಾಲವಿಕೆ ರಾಜನ ಕಣ್ಣಿಗೆ ಬೀಳದಂತೆ ರಾಣಿ ಸರ್ಪಗಾವಲು ಇರಿಸತೊಡಗಿದಳು.

ವಿದರ್ಭರಾಜನಿಂದ ಬಂದ ಪತ್ರವನ್ನೋದುತ್ತಿರುವ ಮಂತ್ರಿಯೊಡನೆ ರಾಜನನ್ನು ಆ ಮೇಲೆ ನಾವು ಕಾಣುತ್ತೇವೆ. ರಾಜನ ನಿರ್ದೇಶ ಪ್ರಕಾರ ಮಂತ್ರಿಯು ಪತ್ರವನ್ನು ಈ ರೀತಿಯಾಗಿ ಓದುವನು—"ಪೂಜ್ಯರು ನನಗೆ ಹೀಗೆ ತಿಳಿಯಪಡಿಸಿದ್ದೀರಿ–'ನಿಮ್ಮ ಪಿತೃಸಹೋದರನ ಮಗನಾದ ಕುಮಾರ ಮಾಧವಸೇನನು ಒಂದು ವಿವಾಹಸಂಬಂಧದ ವಿಚಾರವಾಗಿ ನನಗೆ ಮಾತು ಕೊಟ್ಟಿದ್ದು, ಇತ್ತ ಬರುತ್ತಿರುವಾಗ ನಿನ್ನ ದುರ್ಗರಕ್ಷಕನೊಬ್ಬನು ಬಂಧಿಸಿರುತ್ತಾನೆ. ಅವನನ್ನು ನನಗಾಗಿ ಪತ್ನಿಸೋದರಿಯರೊಂದಿಗೆ ಬಿಟ್ಟುಬಿಡಬೇಕು.' ಸಮಾನರಾದ ಇತರ ರಾಜರಲ್ಲಿ ರಾಜರಾದವರ ವೃತ್ತಿಯು ನಿಮಗೆ ತಿಳಿಯದ್ದಲ್ಲ. ಆದ್ದರಿಂದ ಪೂಜ್ಯರು ಪ್ರಸ್ತುತ ವಿಷಯದಲ್ಲಿ ಮಧ್ಯಸ್ಥರಾಗಿರುವುದೊಳ್ಳಿತು. ಅವನ ಸೋದರಿಯು ವಿಪ್ಲವದಲ್ಲಿ ನಷ್ಟಹೊಂದಿದ್ದಾಳೆ. ಹುಡುಕುವುದಕ್ಕೆ ಪ್ರಯತ್ನಿಸುವೆ. ಅವಶ್ಯವಾಗಿ ಮಾಧವಸೇನನನ್ನು ನಾನು ಬಿಡಬೇಕಿದ್ದರೆ ನನ್ನ ಶ್ಯಾಲನಾದ ಮೌರ್ಯಸಚಿವನನ್ನು ಬಿಡುಗಡೆಗೊಳಿಸೋಣಾಗಲಿ." ಈ ಪತ್ರದಿಂದ ಅಗ್ನಿಮಿತ್ರನು ಕುಪಿತನಾಗಿ, ಸೈನ್ಯವನ್ನು ಕಳುಹಿಸಿ ಆಕ್ರಮಣಮಾಡುವಂತೆ ಅನುಜ್ಞೆಕೊಡಲು ಮಂತ್ರಿಗೆ ತಿಳಿಸುವನು.

ಅಷ್ಟರಲ್ಲಿ ಮಾಲವಿಕೆಯ ದರ್ಶನ ಸಿಗುವಂತೆ ಏನಾದರೂ ಉಪಾಯ ಹುಡುಕೆಂದು ರಾಜನಿಂದ ಆಜ್ಞಪ್ತನಾದ ವಿದೂಷಕನು ಬರುವನು. ರಾಜನು, "ಏನಾದರೂ ಉಪಾಯ ಸಿಕ್ಕಿತೇ?" ಎಂದು ಕೇಳಿದುದಕ್ಕೆ 'ಪ್ರಯೋಗಸಿದ್ಧಿಯನ್ನು ಕೇಳು' ಎಂದು ರಾಜನ ಕಿವಿಯಲ್ಲಿ ತಾನು ಹೂಡಿದ ಉಪಾಯವನ್ನು ಬಿತ್ತರಿಸುವನು. ಇಷ್ಟರಲ್ಲಿ ನೇಪಥ್ಯದಿಂದ ಬೊಬ್ಬೆ ಕೇಳಿಸುವುದು—"ಸಾಕು, ಸಾಕು ಮಾತು. ರಾಜನ ಎದುರಲ್ಲಿಯೇ ನಮ್ಮ

ಹಿರಿಮೆ-ಕಿರಿಮೆಗಳ ನಿರ್ಧಾರವಾಗುವುದು." ಕಂಚುಕಿಯು ಬಂದು, "ಪರಸ್ಪರ ಜಯಾಭಿಲಾಷಿಗಳಾದ ನಾಟ್ಯಾಚಾರ್ಯರಾದ ಹರದತ್ತ-ಗಣದಾಸರು ನಿಮ್ಮನ್ನು ಕಾಣಲಿಚ್ಛಿಸುತ್ತಾರೆ" ಎಂದು ತಿಳಿಸುವನು.

ರಾಜಾಜ್ಞೆಯಂತೆ ಒಳಕ್ಕೆ ಪ್ರವೇಶಿಸುತ್ತಾ, ರಾಜವೈಭವದಿಂದ ಸ್ತಬ್ಧವಾದ ಅವರು ತಮಗಾಗಿ ಪರಿಜನರಿಂದ ತರಲ್ಪಟ್ಟ ಆಸನಗಳಲ್ಲಿ ಕುಳಿತುಕೊಳ್ಳುವರು. ಉಪದೇಶಕಾಲದಲ್ಲಿ ಆಗಮಿಸಲು ಕಾರಣವೇನೆಂದು ರಾಜನು ಪ್ರಶ್ನಿಸುವನು. "ನಾಟ್ಯವನ್ನು ಚೆನ್ನಾಗಿ ಅರಿತವನಾಗಿದ್ದು ರಾಜರಾಣಿಯರಿಂದ ಪರಿಗ್ರಹಿಸಲ್ಪಟ್ಟ ನನ್ನನ್ನು ಈ ಹರದತ್ತನು ಪ್ರಧಾನ ಪುರುಷರೆದುರು, 'ಈತನು ನನ್ನ ಪಾದಧೂಳಿಗೂ ಸಮನಲ್ಲ' ಎಂದು ನಿಂದಿಸಿರುವನು" ಎಂದು ಗಣದಾಸನು ದೂರನ್ನು ಹೇಳಿಕೊಳ್ಳುವನು. ಆಗ ಹರದತ್ತನು, "ಮಹಾಸ್ವಾಮಿ, ಇವನಿಗೂ ನನಗೂ ಸಮುದ್ರ-ಮಡುಗಳಷ್ಟು ಅಂತರವೆಂದು ಮೊದಲು ಜಗಳವನ್ನು ಈತನೇ ಶುರುಮಾಡಿದವನು. ಈಗ ಮಹಾರಾಜನೇ ನ್ಯಾಯತೀರ್ಮಾನ ಮಾಡಬೇಕು" ಎನ್ನುವನು. ಆಗ ರಾಜನು, ತಾನು ತೀರ್ಮಾನಿಸಿದರೆ, ದೇವಿಯು ಪಕ್ಷಪಾತಮಾಡಿದನೆಂದು ಭಾವಿಸಬಹುದಾದುದರಿಂದ ರಾಣಿ ಮತ್ತು ಪರಿವ್ರಾಜಿಕೆಯಾದ ಪಂಡಿತ ಕೌಶಿಕಿಯರ ಎದುರೇ ತೀರ್ಮಾನವಾಗುವುದು ಯುಕ್ತವೆಂದು ಅವರನ್ನು ಕರೆಸುವನು.

ಯಥಾವತ್ತಾಗಿ ಉಪಚಾರಗಳಾದ ಮೇಲೆ, ರಾಜನು ಪರಿವ್ರಾಜಿಕೆಗೆ ವಿಷಯಗಳನ್ನು ವಿವರಿಸಿ ತೀರ್ಮಾನಮಾಡುವಂತೆ ಕೇಳಿಕೊಳ್ಳುತ್ತಾನೆ. ಪಟ್ಟಣ ಹತ್ತಿರವಿರುವಾಗ ಗ್ರಾಮದಲ್ಲಿ ರತ್ನಪರೀಕ್ಷೆ ಮಾಡುವಂತೆ, ರಾಜನಿರುವಾಗ ತಾನು ತೀರ್ಮಾನಮಾಡುವುದು ಅನುಚಿತವೆಂದು ಮೊದಲು ಪರಿವ್ರಾಜಿಕೆ ಹೇಳಿದರೂ, ತಾವಿಬ್ಬರೂ ಪಕ್ಷಪಾತಿಗಳೆಂದು ರಾಜನು ಹೇಳಿದುದಲ್ಲದೆ ಹರದತ್ತ-ಗಣದಾಸರೂ ಆಕೆಯನ್ನೇ ಸಮರ್ಥಿಸಿದಾಗ ಆಕೆ ಒಪ್ಪಿಕೊಳ್ಳಬೇಕಾಗುವುದು. ವಿವಾದವು ಪ್ರಸ್ತಾಪಿಸಲ್ಪಡಲೆಂದು ರಾಜನೆನ್ನುವಾಗ ಪ್ರಯೋಗಪ್ರಧಾನವಾದ ನಾಟ್ಯಶಾಸ್ತ್ರದಲ್ಲಿ ವಿವಾದದಿಂದೇನೆಂದು ಪರಿವ್ರಾಜಿಕೆ ಕೇಳುತ್ತಾಳೆ. ಧಾರಿಣಿಯನ್ನು ಕೇಳಿದರೆ ಇವರ ವಿವಾದವೇ ನನಗೆ ರುಚಿಸುವುದಿಲ್ಲವೆನ್ನುತ್ತಾಳೆ. ಆಗ, "ದೇವಿಯು ನಾನು ಸೋಲುವೆನೆಂದು ತಿಳಿಯಬಾರದು" ಎಂದು ಗಣದಾಸನು ಬಿನ್ನೈಸುತ್ತಾನೆ. "ಹೋತ

ಗಳ ಕಾದಾಟವನ್ನು ನೋಡಿಯೇ ಸಿದ್ಧ; ಸುಮ್ಮನೆ ವೇತನಕೊಡುವುದರಿಂದೇನು?" ಎಂದು ವಿದೂಷಕನು ವಿವಾದದ ಜ್ವಾಲೆಗೆ ತುಪ್ಪವನ್ನೆರೆಯುವನು. ಆಗ ಧಾರಿಣಿ ಆತನನ್ನು ಕಲಹಪ್ರಿಯನೆನ್ನಲು, "ಜಗಳಕ್ಕೆ ತೊಡಗಿದ ಮದಗಜಗಳಲ್ಲೊಂದು ಸೋಲದಿದ್ದರೆ ಶಾಂತಿಯೆಲ್ಲಿ?" ಎಂದು ವಿದೂಷಕನು ಪುನಃ ಹೇಳುವನು- "ಆಚಾರ್ಯರ ಅಂಗಸೌಷ್ಠವವನ್ನು ನೋಡಿರುವೆಯಲ್ಲವೆ? ಹಾಗಿರಲು ಅದಕ್ಕಿಂತ ಹೆಚ್ಚೇನು ಬೇಕು?" ಎಂದು ರಾಜನು ಪರಿವ್ರಾಜಿಕೆಯನ್ನು ಕೇಳುವನು. "ಕೆಲವರಿಗೆ ಜ್ಞಾನವಿರಬಹುದು. ಇನ್ನು ಕೆಲವರು ಅದನ್ನು ಹೇಳಿಕೊಡುವುದರಲ್ಲಿ ನಿಪುಣರಾಗಿರಬಹುದು; ಆದರೆ ಎರಡರಲ್ಲೂ ಚತುರರಾದವರಿಗೆ ಮಾತ್ರ ಅಗ್ರಸ್ಥಾನ ಸಲ್ಲಬೇಕು." ಎಂದು ಪರಿವ್ರಾಜಿಕೆ ಉತ್ತರಿಸುವಳು. "ಉಪದೇಶದರ್ಶನದಿಂದಲೇ ನಿರ್ಣಯಮಾಡಬೇಕೆಂದು ಅದರ ಅರ್ಥ" ಎಂದು ವಿದೂಷಕನು ವ್ಯಾಖ್ಯಾನಿಸುತ್ತಾನೆ. "ಬುದ್ಧಿಯಿಲ್ಲದ ಶಿಷ್ಯೆ ಅಸಫಲತೆಯನ್ನು ಹೊಂದಿದರೆ ಅದು ಆಚಾರ್ಯನ ದೋಷವೇ?" ಎಂದು ಧಾರಿಣಿ ಪ್ರಶ್ನಿಸುವಳು. "ಅಯೋಗ್ಯೆಯಾದ ಶಿಷ್ಯೆಯನ್ನು ಸ್ವೀಕರಿಸುವುದೂ ಬುದ್ಧಿಲಾಘವವನ್ನು ಪ್ರದರ್ಶಿಸುತ್ತದೆ" ಎಂದು ಆಗ ರಾಜನುತ್ತರಿಸುವನು. ಬೇರೆ ಉಪಾಯಗಾಣದ ಧಾರಿಣಿ, ನಿನಗೀ ಕೆಲಸ ಬೇಡವೆಂದು ಗಣದಾಸನಿಗೆ ಹೇಳುತ್ತಾಳೆ. ಆಗ ವಿದೂಷಕನು, "ಸರಸ್ವತಿಗೆ ಅರ್ಪಿಸಿದ ಪ್ರಸಾದವನ್ನು ಯಾವಾಗಲೂ ಬೇಕಾದಷ್ಟು ತಿನ್ನುತ್ತಿರುವ ನಿನಗೆ ಸೋಲುಸಿದ್ಧವಾದ ವಿವಾದವಾದರೂ ಏಕೆ?" ಎಂದು ಹಾಸ್ಯಮಾಡುವನು. "ಸಮಯ ಬಂದಾಗ ವಿವಾದಕ್ಕೆ ಹೆದರಿ ಪರನಿಂದೆಯನ್ನು ಸಹಿಸುತ್ತಿರುವ ಮತ್ತು ಹೊಟ್ಟೆಹೊರೆಯುವುದಕ್ಕಾಗಿರುವ ವಿದ್ಯೆಯುಳ್ಳವರನ್ನು ವ್ಯಾಪಾರಿಯೆನ್ನುವರು" ಎಂದು ಗಣದಾಸನು ಸಿಟ್ಟಿನಿಂದ ಮಾರ್ದನಿಗೊಡುವನು. "ಬಹಳ ಸ್ವಲ್ಪಕಾಲದಿಂದ ಕಲಿಯುತ್ತಿರುವವಳು ನಿನ್ನ ಶಿಷ್ಯೆ ಆದ್ದರಿಂದ ಅವಳ ಉಪದೇಶದರ್ಶನ ತರವಲ್ಲ" ಎಂದು ಧಾರಿಣಿ ಹೇಳಲು, "ಆದ್ದರಿಂದಲೇ ನನ್ನ ನಿರ್ಬಂಧ" ಎಂದು ಗಣದಾಸನು ಒತ್ತಾಯಿಸುತ್ತಾನೆ. "ಹಾಗಾದರೆ, ಇಬ್ಬರೂ ಪರಿವ್ರಾಜಿಕೆಗೆ ಉಪದೇಶದರ್ಶನಮಾಡಿರಿ" ಎಂದು ಧಾರಿಣಿ ಹೇಳಿದರೆ, "ಸರ್ವಜ್ಞನೇ ಆದರೂ ಒಬ್ಬನ ನಿರ್ಣಯವು ದೋಷಕರ" ಎಂದು ಪರಿವ್ರಾಜಿಕೆ ಹೇಳುತ್ತಾಳೆ. ಬೇರೆ ಉಪಾಯಗಾಣದ ದೇವಿ ಸಿಟ್ಟಿನಿಂದ ಮುಖ ತಿರುಗಿಸುತ್ತಾಳೆ.

*

"ಕಾರಣವಿಲ್ಲದೆ ಇವನೊಡನೆ ಏಕೆ ಕೋಪಿಸುವೆ? ಗಂಡನ ಮೇಲೆ ತಮ್ಮ ಅಧಿಕಾರ ನಡೆಯುವುದಿದ್ದರೂ ಕಾರಣವಿಲ್ಲದೆ ಕುಟುಂಬಿನಿಯರು ಕುಪಿತ ರಾಗುವುದಿಲ್ಲ" ಎಂದು ಪರಿವ್ರಾಜಿಕೆ ಸಮಾಧಾನಪಡಿಸುತ್ತಾಳೆ. "ಕಾರಣ ವಿಲ್ಲದಿಲ್ಲ; ತನ್ನ ಪಕ್ಷ ಜಯಿಸಬೇಕೆಂದು. ಹೇ ಗಣದಾಸ, ಕೋಪದ ನೆವದಿಂದ ದೇವಿ ನಿನ್ನನ್ನು ರಕ್ಷಿಸಿದಳು. ಕಲಿತವರೆಲ್ಲಾ ಉಪದೇಶದರ್ಶನ ದಲ್ಲಿ ನಿಪುಣರಾಗಬೇಕೆಂದಿಲ್ಲ" ಎಂದು ವಿದೂಷಕನು ಪುನಃ ಹಾಸ್ಯಮಾಡು ತ್ತಾನೆ. ಗಣದಾಸನಿಗಿನ್ನು ತಡೆಯಲಾಗುವುದಿಲ್ಲ. ರೊಚ್ಚಿಗೆದ್ದ ಅವನು "ನನ್ನ ಉಪದೇಶದರ್ಶನಕೆ, ಅನುಮತಿಯೀಯುವುದಿಲ್ಲವಾದರೆ, ಈಗಲೇ ನಾನು ನಿನ್ನಿಂದ ತ್ಯಜಿಸಲ್ಪಟ್ಟಿದ್ದೇನೆ" ಎಂದು ಏಳುವನು. ಬೇರೆ ಉಪಾಯ ಗಾಣದ ಧಾರಿಣಿ ಈಗ ಸಮ್ಮತಿಸುವಳು. ಮಾಲವಿಕೆ ರಾಜನ ಕಣ್ಣಿಗೆ ಬೀಳಬಾರದೆಂಬ ಉದ್ದೇಶದಿಂದ ಧಾರಿಣಿ ಇಷ್ಟೆಲ್ಲ ತಡೆಮಾಡುತ್ತಿರುವಳೆಂದು ಆತನಿಗೆ ಈ ವರೆಗೆ ತಿಳಿದಿರಲಿಲ್ಲ. ಈಗ ಅವನು, ಅಭಿನಯಿಸಬೇಕಾದ ವಸ್ತು ಯಾವುದೆಂದು ಕೇಳುತ್ತಾನೆ. ಧಾರಿಣಿ ಅಭಿಪ್ರಾಯ ಕೊಡಲು ಸಮ್ಮತಿಸದಿರಲು ಪರಿವ್ರಾಜಿಕೆ, "ಛಲಿತವೆಂಬ ನಾಟ್ಯವು ದುಷ್ಪ್ರಯೋಜ್ಯ ವಾದುದರಿಂದ ಅದರಲ್ಲೇ ನಿಮ್ಮಿಬ್ಬರ ಪರೀಕ್ಷೆಯಾಗಲಿ" ಎನ್ನುವಳು. ಹಾಗೆಯೇ ನೃತ್ಯದ ಏರ್ಪಾಡು ನಡೆಯುವುದು. ರಹಸ್ಯವನ್ನರಿತ ಧಾರಿಣಿ, "ಇದೇ ನೈಪುಣ್ಯ ರಾಜಕಾರ್ಯದಲ್ಲೂ ಇರುತ್ತಿದ್ದರೆ ಚೆನ್ನಾಗಿತ್ತು" ಎಂದು ರಾಜನೊಡನೆ ಹೇಳುವಳು. "ಇದರಲ್ಲಿ ನನ್ನ ಕೈವಾಡವಿಲ್ಲ. ಸಮಾನ ವಿದ್ಯೆಯುಳ್ಳವರು ಪ್ರಾಯಶಃ ಪರಸ್ಪರ ಯಶಾಭಿಲಾಷಿಗಳು" ಎಂದು ರಾಜನು ಆಕೆಯನ್ನು ಸಮಾಧಾನಪಡಿಸುತ್ತಾನೆ. ಅಷ್ಟರಲ್ಲಿ ನೃತ್ಯ ಸಿದ್ಧ ತೆಯ ಸೂಚನೆಯಾಗಿ ಮೃದಂಗಧ್ವನಿಯಾಗಲು ಪರ್ಯುತ್ಸುಕನಾದ ರಾಜನು ಅವಸರದಿಂದ ರಾಣಿಯೊಡಗೂಡಿ ಪ್ರೇಕ್ಷಾಗಾರಕ್ಕಾಗಮಿಸುವನು.

## ಎರಡನೆಯ ಅಂಕ

ಈಗ ಯಾರ ನೃತ್ಯವನ್ನು ಮೊದಲು ದರ್ಶಿಸುವುದೆಂಬ ಸಮಸ್ಯೆ ಯುದ್ಭವಿಸುವುದು. ಜ್ಞಾನವೃದ್ಧತ್ವದಲ್ಲಿ ಇಬ್ಬರೂ ಸಮಾನರಾದುದರಿಂದ ವಯೋವೃದ್ಧನಾದ ಗಣದಾಸನಿಗೆ ಪುರಸ್ಕಾರವನ್ನು ಕೊಡಬೇಕೆಂದು ಪರಿ ವ್ರಾಜಿಕೆ ಹೇಳುವಳು. ಮಾಲವಿಕೆಯನ್ನು ನೋಡಲು ಉತ್ಸುಕನಾದ

ರಾಜನ ಕಣ್ಣುಗಳು ಅಧೀರತೆಯಿಂದ ತೆರೆಯನ್ನು ಹರಿದೋಗೆಯುವುದರಲ್ಲಿರುವುವು. "ನಯನವುಧು ಉಪಸ್ಥಿತವಾಗಿದೆ; ತುಂಬಿಯೂ ಬಳಿಯಲ್ಲೇ ಇದೆ. ಆದ್ದರಿಂದ ಅಪ್ರಮತ್ತನಾಗಿ ಕುಡಿ" ಎಂದು ವಿದೂಷಕನು ಅರಸನನ್ನು ಎಚ್ಚರಿಸುವನು.

ಮಾಲವಿಕೆಯೀಗ ಪ್ರವೇಶಿಸುವಳು. "ಚಿತ್ರದಲ್ಲಿರುವುದಕ್ಕಿಂತ ಕಡಿಮೆಯಿಲ್ಲ ಈಕೆಯ ಸೌಂದರ್ಯ" ಎಂದು ವಿದೂಷಕನೆನ್ನುವನು. ರಾಜನು ಕೂಡ, "ಚಿತ್ರದಲ್ಲಿ ಈಕೆಯನ್ನು ನೋಡಿ ಇವಳ ಕಾಂತಿಯ ಬಗ್ಗೆ ಸಂಶಯಪಡುತ್ತಿದ್ದ ನನ್ನ ಮನಸ್ಸು ಈಗ, ಆ ಚಿತ್ರಗಾರನೇ ಸಮಾಧಿಹೀನನೆಂದು ಬಗೆಯುತ್ತದೆ" ಎನ್ನುವನಲ್ಲದೆ ದೀರ್ಘನೇತ್ರಗಳೂ ಶರತ್ಕಾಲದ ಚಂದ್ರನಂತೆ ಕಾಂತಿಯೂ ಉಳ್ಳ ವದನ, ಅಂಸಗಳಲ್ಲಿ ವಕ್ರವಾದ ಬಾಹುಗಳು, ನಿಬಿಡವೂ ಉನ್ನತವೂ ಆದ ಸ್ತನಗಳಿಂದ ಸಂಕ್ಷಿಪ್ತವಾದ ಎದೆ, ಮುಷ್ಟಿಪ್ರಮಾಣದ ಮಧ್ಯ, ವಿಶಾಲವಾದ ಜಘನ, ಬಿಲ್ಲಿನಂತೆ ವಕ್ರವಾದ ಬೆರಳುಗಳಿಂದ ಕೂಡಿದ ಪಾದಗಳು—ಇವುಗಳಿಂದ ಕೂಡಿದ, ನಾಟ್ಯಾಚಾರ್ಯನ ಇಚ್ಛೆಯನ್ನನುಸರಿಸಿಯೇ ಸೃಷ್ಟಿಸಲ್ಪಟ್ಟಂತೆ ತೋರುವ ನವತರುಣಿ ಮಾಲವಿಕೆಯ ಸೌಂದರ್ಯರಾಶಿಯನ್ನು ಕಣ್ತುಂಬ ನೋಡಿ ಆನಂದಿಸುವನು. ಮಾಲವಿಕೆಯೀಗ ನಾಲ್ಕು ಚರಣಗಳುಳ್ಳ ಈ ಅರ್ಥ ಬರುವ ಶ್ಲೋಕವೊಂದನ್ನು ಹಾಡಿ ಯಥಾರಸವಾಗಿ ಅಭಿನಯಿಸುವಳು—"ಪ್ರಿಯನು ದುರ್ಲಭನಾಗಿರಲು, ಎಲೆ ಹೃದಯವೆ, ನಿರಾಶೆಹೊಂದು. ಆಹಾ! ನನ್ನ ಎಡದ ಕಡೆಗಣ್ಣು ಸ್ಫುರಿಸುತ್ತಿರುವುದು. ಚಿರಕಾಲದಿಂದ ನೋಡಿದ ಈತನನ್ನು ಪುನಃ ಹೇಗೆ ನೋಡಲಿ! ಹೇ ನಾಥ, ಪರಾಧೀನೆಯಾದ ನನ್ನನ್ನು ನಿನ್ನಲ್ಲಿ ತೃಷ್ಣೆಯುಳ್ಳವಳೆಂದು ತಿಳಿ." ಇದು ಅರಸನನ್ನೇ ಉದ್ದೇಶಿಸಿ ಹೇಳಿದಂತೆ ಪರಿಣಾಮಕಾರಿಯಾಗುವುದು.

ಇನ್ನೇನು, ಮಾಲವಿಕೆ ಹೊರಡುವುದರಲ್ಲಿರುವಳು. ಅಷ್ಟರಲ್ಲಿ ವಿದೂಷಕನು ಕ್ರಮಭಂಗವಾಗಿದೆಯೆಂದು ಸೂಚಿಸಿದುದರಿಂದ ಪುನಃ ನಿಲ್ಲುವಳು. ಮಣಿಗಂಟಿನಲ್ಲಿ ಸ್ಥಿತವಾದ ಬಳೆಗಳುಳ್ಳ ಎಡಗೈಯನ್ನು ನಿತಂಬದಲ್ಲಿರಿಸಿ ಶ್ಯಾಮಾಮರದಂತೆ ಬಲಗೈಯನ್ನು ಕೆಳಗೆ ಬಿಟ್ಟು, ಪಾದಾಂಗುಷ್ಠಗಳಿಂದ ನೆಲದಲ್ಲಿ ಬಿದ್ದ ಕುಸುಮಗಳೊಡನೆ ಆಡುತ್ತಾ ನೆಲದ ಮೇಲೆ ದೃಷ್ಟಿಯನ್ನಿರಿಸಿ ನಿಂತ ಆ ನೋಟವು ನೃತ್ಯಕ್ಕಿಂತಲೂ ಸೊಗಸೆನಿಸುವುದು

ಅಗ್ನಿಮಿತ್ರನಿಗೆ "ವಿದೂಷಕನ ಮಾತನ್ನೂ ಮನಸ್ಸಿಗೆ ಹಚ್ಚಿಕೊಳ್ಳುವೆಯಾ?" ಎಂದು ರಾಣಿ ರಾಜನನ್ನು ಕೇಳಲು, "ರಾಜನ ನಿಕಟವರ್ತಿಯಾದುದರಿಂದ ವಿದೂಷಕನೂ ಸೂಕ್ಷ್ಮದರ್ಶಿ. ಏಕೆಂದರೆ, ಮಂದಬುದ್ಧಿಯುವನಾದರೂ ವಿದ್ವಾಂಸರ ಸಂಸರ್ಗದಿಂದ ತನ್ನ ಬುದ್ಧಿಮಾಂದ್ಯವನ್ನು ಕಳೆದುಕೊಳ್ಳುತ್ತಾನೆ—ಮಲಿನವಾದ ನೀರು ಪಂಕಚ್ಛಿತ್ ಫಲದ ಸಂಸರ್ಗದಿಂದ ಶುದ್ಧವಾಗುವಂತೆ" ಎಂದು ಗಣದಾಸನು ಹೇಳುವನು. ಹಾಗೆಂದು ವಿದೂಷಕನನ್ನೇ ಕೇಳಿದರೆ "ಸಾಕ್ಷಿಣಿಯಾದ ಪರಿವ್ರಾಜಿಕೆಯನ್ನು ಮೊದಲು ಕೇಳಿರಿ; ಆ ಮೇಲೆ ಹೇಳುವೆನು" ಎಂದು ಮಾರ್ನುಡಿಯುವನು. ಅಭಿನಯಗಳಿಂದ ಅರ್ಥವು ಚೆನ್ನಾಗಿ ಸೂಚಿತವಾದ ಪದಗತಿಯು ಲಯವನ್ನನುಸರಿಸಿದ, ರಸದಲ್ಲಿ ತನ್ಮಯತೆಹೊಂದಿದ, ಬೆರಳುಗಳ ಮನೋಹರವಾದ ಅಭಿನಯದ ಮೂಲಕ ಭಾವದ ಹಿಂದೆ ಭಾವವು ಹೊರಹೊಮ್ಮಿದ ನೃತ್ಯದ ಕುರಿತು, ಪರಿವ್ರಾಜಿಕೆ ತನ್ನ ಮೆಚ್ಚುಗೆಯನ್ನು ಮನವಾರೆ ವ್ಯಕ್ತಪಡಿಸುವಳು. ರಾಜನೂ ಕೂಡ ತನ್ನ ಪಕ್ಷದವನಾದ ಹರದತ್ತರ ಸೋಲನ್ನು ಮನಗಾಣುವನು. ಹರ್ಷಿತನಾದ ಗಣದಾಸನು, ಅಗ್ನಿಯಲ್ಲಿರಿಸಿದ ಕಾಂಚನದಂತೆ ವಿದ್ವಾಂಸರ ಮುಂದೆ ಸಫಲವಾದ ತನ್ನ ಉಪದೇಶವು ಶುದ್ಧವಾದುದೆಂದು ಮನಗಂಡು ನಾಟ್ಯಾಚಾರ್ಯನಾದುದಕ್ಕೆ ಸಾರ್ಥಕವಾಯಿತೆಂದುಕೊಳ್ಳುವನು. ಮಾಲವಿಕೆಯನ್ನು ನಿಲ್ಲಿಸುವ ಉದ್ದೇಶದಿಂದ ನೆವವನ್ನೊಡ್ಡಿದ ವಿದೂಷಕನು, "ಪ್ರಥಮೋಪದೇಶದರ್ಶನದ ಈ ಸಂದರ್ಭದಲ್ಲಿ ಪ್ರಥಮತಃ ಮಾಡತಕ್ಕ ಬ್ರಾಹ್ಮಣಪೂಜೆಯನ್ನು ನೀವು ಮರೆತಿರುವಿರಿ" ಎನ್ನುವನು. ಎಲ್ಲರೂ ನಗುವರು. ಮಾಲವಿಕೆಯೂ ಮುಗುಳ್ನಗೆ ಬೀರಲು, ಅದನ್ನು ಕಂಡ ರಾಜನ ಕಣ್ಣುಗಳು ಧನ್ಯವಾಗುವುವು. "ಅದಕ್ಕೇನು, ಇದು ಪ್ರಥನೋಪದೇಶದರ್ಶನವಲ್ಲ" ಎಂದು ಗಣದಾಸನು ಹೇಳುವನು. ಮಾಲವಿಕೆ ನಿಷ್ಕ್ರಮಿಸುವಳು.

"ನಿನ್ನ ಸೇವೆಯನ್ನು ಮಾಡಲು, ನನ್ನ ಶಕ್ತಿಯಲ್ಲಿರುವುದು ಇಷ್ಟೇ" ಎಂದು ವಿದೂಷಕನು ರಾಜನಿಗೆ ಹೇಳುವನು. ಅದಕ್ಕೆ ರಾಜನು, ಹಾಗೆನ್ನಬಾರದೆಂದು ಹೇಳುವನು. ತನ್ನ ಪ್ರಿಯೆಯು ಹೋದುದರಿಂದ ಕಣ್ಣುಗಳ ಭಾಗ್ಯವು ಅಸ್ತವಾದಂತೆಯೂ, ಹೃದಯದ ಮಹೋತ್ಸವವು ಅವಸಾನ ಹೊಂದಿದಂತೆಯೂ, ಧೃತಿಯ ಬಾಗಿಲನ್ನು ಮುಚ್ಚಿದಂತೆಯೂ ದುಃಖ

ವಾಗುವುದು ಅಗ್ನಿಮಿತ್ರನಿಗೆ. ಇಷ್ಟರಲ್ಲಿ ಹರದತ್ತನು ತನಗೆ ಅವಕಾಶ ಕೊಡಬೇಕೆನ್ನಲು, ತನಗೆ ಮನಸ್ಸಿಲ್ಲದಿದ್ದರೂ ಹೊರಗೆ ತೋರಿಸಿಕೊಳ್ಳದೆ ರಾಜನು ಒಪ್ಪಿಕೊಳ್ಳಬೇಕಾಗುವುದು. ಆಗಲೇ ವೈತಾಳಿಕರು ಮಧ್ಯಾಹ್ನ ವಾದುದರ ಸೂಚನೆಯಿತ್ತುದರಿಂದ ಇರಾವತಿಯ ನೃತ್ಯವು ಮುಂದು ವರಿಸಲ್ಪಡುವುದು.

## ಮೂರನೆಯ ಅಂಕ

ಮೂರನೆಯ ಅಂಕದ ಪ್ರವೇಶಕದಿಂದ ವ್ಯಕ್ತವಾಗುವ ಕಥಾಭಾಗ ಹೀಗಿದೆ—ನಾಟ್ಯಸ್ಪರ್ಧೆಯಲ್ಲಿ ಮಾಲವಿಕೆಯ ನೈಪುಣ್ಯದಿಂದ ಗಣದಾಸನು ಜಯಿಸಿದನು. ಆ ಪ್ರಸಂಗದ ತರುವಾಯ ರಾಜನಿಗೆ ಮಾಲವಿಕೆಯ ಚಿಂತೆ ಉಲ್ಬಣಗೊಂಡಿತು. ಮಾಲವಿಕೆ ಕೂಡ ರಾಜವಿಷಯಕವಾದ ಕಾಮ ದಿಂದ ದಿನೇ ದಿನೇ ಕೃಶವಾಗತೊಡಗಿದಳು. ಈಗ, ಮನನೊಂದ ಧಾರಿಣಿಯ ಚಿತ್ತವನ್ನು ಶಾಂತಗೊಳಿಸುವ ಇಚ್ಛೆಯುಳ್ಳ ಪರಿವ್ರಾಜಿಕೆ ತಕ್ಕ ಕಾಣಿಕೆ ಯೊಂದಿಗೆ ರಾಣಿಯ ಬಳಿ ಹೋಗಲು ಸನ್ನದ್ಧಳಾಗಿದ್ದಾಳೆ. ಉದ್ಯಾನದಲ್ಲಿ ಅಶೋಕ ವೃಕ್ಷವೊಂದು ಚಿರಕಾಲದಿಂದ ಹೂಬಿಡದಿರುವ ವಿಷಯವೂ ಧಾರಿಣಿಯ ಕಿವಿಗೆ ತಲಪುತ್ತದೆ.

ವಿದೂಷಕನು, ಕಾಮದಿಂದ ಕೃಶಶರೀರನಾದ ರಾಜನಲ್ಲಿ ವಿಜ್ಞಾಪಿಸು ವನು—"ಬಕುಲಾವಲಿಕೆಯೊಡನೆ ನೀನು ಹೇಳಿದ ವಿಷಯವನ್ನೆಲ್ಲಾ ತಿಳಿ ಸಿರುವೆನು. ರಾಣಿ ಆ ಮುಗ್ಧೆಯ ಮೇಲೆ ಸರ್ಪಗಾವಲು ಇರಿಸಿರುವುದ ರಿಂದ ಕಾರ್ಯವು ಅತ್ಯಂತ ಕಷ್ಟವಾದರೂ ಪ್ರಯತ್ನಮಾಡುವೆನೆಂದು ಆಕೆ ಮಾತುಕೊಟ್ಟಿರುವಳು." ಮದನಪೀಡಿತನಾಗಿ ದಿಕ್ಕುತೋಚದೆ ಅನ್ಯ ಮನಸ್ಕನಾದ ರಾಜನು, ಉಳಿದ ಸಮಯವನ್ನೆಂತು ಕಳೆಯಲಿ ಎಂದು ಪರಿತಪಿಸುವನು. ಆಗ ವಿದೂಷಕನು, ಇರಾವತಿಯು ರಾಜನೊಡನೆ ಉಯ್ಯಾಲೆಯಾಡಲು ಬರುವಂತೆ ಕೇಳಿದುದನ್ನೂ, ರಾಜನು ಅವಳಿಗೆ ಮಾತು ಕೊಟ್ಟುದನ್ನೂ ನೆನಪಿಗೆ ತಂದು, 'ಆದುದರಿಂದ ಪ್ರಮದವನಕ್ಕೆ ಹೋಗೋಣ' ಎಂದು ಪ್ರೇರಿಸುವನು. ಸ್ತ್ರೀಯರು ಸ್ವಭಾವತಃ ನಿಪುಣೆಯರಾಗಿರಲು, ಅನ್ಯ ಮನಸ್ಕನಾದ ತಾನು ಹೋಗಿ ಅಂತರಂಗವನ್ನು ತಿಳಿಯುವ ಅವಕಾಶವನ್ನು ಕೊಡುವುದರ ಬದಲು ಏನಾದರೂ ನೆವವೊಡ್ಡಿ ಹೋಗದಿರುವುದೇ ಮೇ

ಲೆಂದು ರಾಜನು ಬಗೆದರೂ, ಅಂತಃಪುರದಲ್ಲಿರಿಸಿದ ಮನಸ್ಸನ್ನು ಹಾಗೆ ಒಮ್ಮಿಂದೊಮ್ಮೆಗೆ ತಿರುಗಿಸುವುದು ತರವಲ್ಲವೆಂದು ವಿದೂಷಕನು ನುಡಿದಾಗ, ಬೇರೆ ಉಪಾಯಗಾಣದೆ ಹೋಗಬೇಕಾಗುವುದು. ಮುಂದೆ ಹೋಗುತ್ತ, ದಕ್ಷಿಣ ಮಾರುತನು ಬೆನ್ನನ್ನು ನೇವರಿಸುತ್ತಿರಲು, ಮದವೇರಿದ ಕೋಗಿಲೆಗಳ ಕರ್ಣಮಧುರವಾದ ಕಲರವದಿಂದ ವಸಂತನು, "ಕಾಮವೇದನೆಯನ್ನು ಸಹಿಸಲು ಸಾಧ್ಯವಾಗುತ್ತಿದೆಯೆ?" ಎಂದು ಪ್ರೀತಿಯಿಂದ ಪ್ರಶ್ನಿಸುವಂತೆ ಭಾಸವಾಗುವುದು ರಾಜನಿಗೆ. ರಕ್ತಾಶೋಕದ ಕೆಂಬಣ್ಣದಿಂದ ಅಧರಗಳಿಗೆ ಹಚ್ಚಿದ ಅಲಕ್ತಕವನ್ನು ಮೀರಿಸಿದ, ನೀಲ ಕೆಂಪು ಬಿಳಿ ಬಣ್ಣಗಳಿಂದ ರಂಜಿತವಾದ ಕುರವಕ ಪುಷ್ಪದಿಂದ ಕಪೋಲಗಳಲ್ಲಿ ಚಿತ್ರಿತವಾದ ವರ್ಣರಾಗವನ್ನು ಅತಿಕ್ರಮಿಸಿದ ಮತ್ತು ತುಂಬಿಗಳಿಂದ ಪರಿಶೋಭಿಸುವ ತಿಲಕಪುಷ್ಪಗಳಿಂದ ತಿಲಕವನ್ನು ಸೋಲಿಸಿದ ಮಧುಮಾಸದ ಶೋಭೆಯು ತರುಣಿಯರ ಅಲಂಕಾರವನ್ನು ನಾಚಿಸುವಂತೆ ತೋರುವುದು, ಪ್ರಮದವನವನ್ನು ಪ್ರವೇಶಿಸಿದ ಅಗ್ನಿಮಿತ್ರನಿಗೆ.

ಹೀಗೆ ಉದ್ಯಾನದ ಶೋಭೆಯನ್ನು ಸವಿಯುತ್ತಿರಲು, ಉಯ್ಯಾಲೆಯಿಂದ ಬಿದ್ದು ಕಾಲು ನೋಯಿಸಿಕೊಂಡ ರಾಣಿಯಿಂದ ಅಶೋಕವೃಕ್ಷದ ದೋಹದವನ್ನು ಪೂರೈಸಲು ನಿಯುಕ್ತಳಾಗಿದ್ದ, ಕಾಮಪರವಶಳಾದ ಮಾಲವಿಕೆ ಪ್ರವೇಶಿಸುವಳು. ನಿತಂಬಬಿಂಬದಲ್ಲಿ ವಿಪುಲವಾಗಿಯೂ ಮಧ್ಯದಲ್ಲಿ ಕೃಶವಾಗಿಯೂ ಕುಚಗಳಲ್ಲಿ ಉನ್ನತವಾಗಿಯೂ ಇರುವ, ಕೃಶವಾಗಿ ಹೋದುದರಿಂದ ಅಲ್ಪ ಕುಸುಮವುಳ್ಳ ಕುಂದಲತೆಯಂತೆ ಶೋಭಿಸುವ, ತನ್ನ ಜೀವಿತವೇ ಮೂರ್ತಿವೆತ್ತಂತೆ ಬರುತ್ತಿರುವ ಮಾಲವಿಕೆಯನ್ನು ನೋಡಿ ರಾಜನು ಅಪಾರ ಹರ್ಷಗೊಳ್ಳುವನು; ಕಾಮದಿಂದಾಗಿಯೇ ಕೃಶಳಾಗಿರುವಳೆಂದು ವಿದೂಷಕನೆಂದರೂ, ಆಧಾರವಿಲ್ಲದೆ ನಿಶ್ಚಯಿಸಲು ರಾಜನಿಗೆ ಸಾಧ್ಯವಾಗದು. ಅಷ್ಟುಹೊತ್ತಿಗೆ, ಬಕುಲಾವಲಿಕೆ ಚರಣಾಲಂಕಾರದೊಡನೆ ಬಂದು ಮಾಲವಿಕೆಯ ಒಂದು ಚರಣವನ್ನು ಶೃಂಗರಿಸುವಳು. 'ಕುಸುಮವನ್ನು ಬಿಡದ ಅಶೋಕವನ್ನು ಅಥವಾ ಅಪರಾಧಿಯಾಗಿ ತಲೆಬಾಗಿದ ಪ್ರಿಯನನ್ನು ಸ್ಪರ್ಶಿಸಲು ಯೋಗ್ಯವಾಗಿರುವುದು ಈ ಚರಣ' ಎಂದು ರಾಜನು ಬಗೆಯುವಷ್ಟರಲ್ಲಿ ಇರಾವತಿಯು ಚೇಟಿ ನಿಪುಣಿಕೆಯೊಡನೆ ಬರುವಳು. ರಾಜನನ್ನು ಕಾಣುವ ಇಚ್ಛೆಯಿಂದ ಬಂದ ಅವರಿಗೆ ಮಾಲ-

ವಿಕೆಯನ್ನು ನೋಡಿ ಚೂತಾಂಕುರವನ್ನು ಹುಡುಕುವಾಗ ಇರುವೆ ಕಚ್ಚಿ ದಂತಾಗುವುದು. ಇರಾವತಿಯ ಅಸೂಯಾಜ್ವಾಲೆ ಪ್ರಜ್ವಲಿಸುವುದು.

ಈ ಸಮಯದಲ್ಲಿ ದೌತ್ಯವನ್ನು ವಹಿಸಿದ ಬಕುಲಾವಲಿಕೆ ರಾಜನ ಪ್ರೇಮಸಂದೇಶವನ್ನು ಮಾಲವಿಕೆಗೆ ಒಪ್ಪಿಸುವ ಕಾರ್ಯನಿರ್ವಹಣದಲ್ಲಿ ತೊಡಗಿರುವಳು. 'ಇಂತಹ ಅಲಂಕಾರ ವಿದ್ಯೆಯನ್ನು ಎಲ್ಲಿಂದ ಕಲಿತೆ?' ಎಂದು ಮಾಲವಿಕೆ ಕೇಳಿದರೆ, ರಾಜನ ಶಿಷ್ಯೆ ತಾನೆಂದುತ್ತರಿಸುವಳು.

ಬಕುಲಾವಲಿಕೆ—ಸರ್ವವಿಧಗಳಿಂದಲೂ ಭರ್ತೃವಿನ ಅಂಕದಲ್ಲಿ ಸುಖಿಸು.

ಮಾಲವಿಕೆ—ಆಡಬಾರದ್ದನ್ನು ಆಡುತ್ತಿರುವೆ.

ಬ—ಆಡಬೇಕಾದುದನ್ನೇ ಆಡಿದ್ದೇನೆ

ಮಾ—ನಿನ್ನ ಪ್ರೀತಿಗೆ ಪಾತ್ರಳಲ್ಲವೆ ನಾನು?

ಬ—ನನ್ನ ಮಾತ್ರವಲ್ಲ.

ಮಾ—ಮತ್ತಾರ?

ಬ—ಗುಣಪ್ರಿಯನಾದ ರಾಜನ ಪ್ರೀತಿಗೂ ಕೂಡ.

ಮಾ—ಸುಳ್ಳು ಹೇಳುತ್ತಿರುವೆ. ಅದು ನನ್ನ ಮನಸ್ಸಿನಲ್ಲಿಲ್ಲ.

ಬ—ನಿನ್ನಲ್ಲಿಲ್ಲದಿರಬಹುದು. ಆದರೆ ರಾಜನ ಕೃಶವಾದ ಅಂಗಗಳಲ್ಲಿ ಕಂಡುಬರುತ್ತಿದೆ. ಅನುರಾಗವನ್ನು ಅನುರಾಗದಿಂದಲೇ ಪರೀಕ್ಷಿಸಬೇಕೆಂಬ ಸಾಧುಜನರ ಮಾತನ್ನು ಸತ್ಯಗೊಳಿಸು.

ಮಾ—ನಿಜವಾಗಿಯೂ ಮನಃಪೂರ್ವಕ ಆಡುತ್ತಿರುವೆಯೇನು?

ಬ—ಅಲ್ಲ, ಅಲ್ಲ. ಬಿಂಬಾಂತರಿಸಲ್ಪಟ್ಟ, ರಾಜನ ಪ್ರಣಯಮೃದುವಾದ ಅಕ್ಷರಗಳಿವು.

ಮಾ—ದೇವಿಯನ್ನು ನೆನೆದು ಎದೆಗುಂದಿದ್ದೇನೆ.

ಬ - ತುಂಬಿ ಬರುವುದೆಂದು ವಸಂತಾವತಾರಸರ್ವಸ್ವವೆನಿಸಿದ ಚೂತಾಂಕುರದಿಂದ ಅಲಂಕರಿಸಿಕೊಳ್ಳಬಾರದೇನು?

ಮಾ—ಹಾಗಾದರೆ, ಅತ್ಯಂತ ಕಷ್ಟಕಾಲದಲ್ಲೂ ನನ್ನ ಸಹಾಯಿನಿಯಾಗು.

ಬ—ಮರ್ದಿಸಿದಷ್ಟು ಸುರಭಿಯನ್ನೀವ "ಬಕುಲಾವಲಿಕೆ"ಯಲ್ಲವೆ ನಾನು?

ಇದನ್ನೆಲ್ಲಾ ಮರೆಯಾಗಿ ನೋಡುತ್ತಿರುವ ರಾಜನಿಗೆ, ಕಾಮಿಯ ಪ್ರಾಣಗಳು ದೂತಿಯ ಅಧೀನವೆಂದು ಮನವರಿಕೆಯಾಗುವುದು. ಇರಾವತಿಗೂ ಬಕುಲಾವಲಿಕೆಯ ನೈಪುಣ್ಯದ ಅರಿವಾಗುವುದು. ಈಗ ಮಾಲವಿಕೆಯ ಚರಣಾಲಂಕಾರಗಳು ಪೂರ್ತಿಯಾಗಿವೆ. ಬಕುಲಾವಲಿಕೆ ಮಾಲವಿಕೆಗೆ, 'ರಾಗ(ವರ್ಣ)ದಿಂದ ತುಂಬಿರುವುದೂ ಉಪಯೋಗಕ್ಷಮವೂ ಆದ ಈ (ಮರವು) ನಿನ್ನ ಮುಂದಿರುವುದು' ಅಥವಾ 'ರಾಗ(ಪ್ರೇಮ)ದಿಂದ ತುಂಬಿರುವವನೂ ಉಪಭೋಗಕ್ಷಮನೂ ಆದ ಈ (ರಾಜನು) ನಿನ್ನ ಮುಂದಿರುವನು' ಎಂಬ ದ್ವಂದ್ವಾರ್ಥವುಳ್ಳ ಮಾತನ್ನು ಹೇಳುವಳು. ಪ್ರಿಯನನ್ನು ಚಿಂತಿಸುತ್ತಿರುವ ಮಾಲವಿಕೆ ಫಕ್ಕನೆ ಉತ್ಸುಕಳಾಗಿ, "ಯಾರು ಭರ್ತೃವೇ?" ಎಂದು ನೋಡುವಳು. ಆ ಮೇಲೆ ಸತ್ಯಸ್ಥಿತಿಯ ಅರಿವಾಗಿ ಮ್ಲಾನವದನೆಯಾಗುವಳು. ರಾಜನ ಆನಂದಕ್ಕೀಗ ಪಾರವಿಲ್ಲ ಅವನು ತನ್ನಲ್ಲೀ ಹೇಳುವನು—"ಪರಸ್ಪರ ಆತುರೋತ್ಕಂಠಿಗಳಿಲ್ಲದೆ ಯಶಸ್ವಿಗಳಾಗಿ ಸಮಾಗಮ ಹೊಂದಿದರೂ, ನಾನು ಅದನ್ನು ಮೆಚ್ಚಲಾರೆ. ಸಮಾನರಾಗಿಗಳಾಗಿದ್ದು ಪರಸ್ಪರ ಸಮಾಗಮಹೊಂದಲಾರದೆ ಮರಣಹೊಂದಿದರೂ ಇದಕ್ಕಿಂತ ಲೇಸು." ಮಾಲವಿಕೆಯೀಗ ಅಶೋಕ ಮರವನ್ನು ಚರಣದಿಂದ ಸ್ಪರ್ಶಿಸಿ ದೋಹದವನ್ನು ಪೂರೈಸುವಳು.

ಇದು ಒಳ್ಳೆಯ ಸಂದರ್ಭವೆಂದು ಪರಿಹಾಸಮಾಡುವ ಇಚ್ಛೆಯುಳ್ಳ ವಿದೂಷಕನು ರಾಜನೊಂದಿಗೆ ಪ್ರವೇಶಿಸುವನು. ಮುಂದೆ ಹೋಗಿ ಮಾಲವಿಕೆಯನ್ನುದ್ದೇಶಿಸಿ ಹೀಗೆ ಹೇಳುವನು—"ನಮ್ಮ ಈ ಮಹಾರಾಜನ ಪ್ರಿಯಸಖನಾದ ಈ ಅಶೋಕವೃಕ್ಷವನ್ನು ಹೀಗೆ ಎಡಗಾಲಿನಿಂದ ತುಳಿಯುವುದು ಯುಕ್ತವಲ್ಲ." ಇವರನ್ನು ಕಂಡ ಅಂಗನೆಯರು ದಿಗ್ಭ್ರಾಂತರಾಗುವರು. ವಿದೂಷಕನು ಮುಂದುವರಿಸುವನು—"ಬಕುಲಾವಲಿಕೆ, ತಿಳಿದಿರುವ ನೀನಾದರೂ ಇಂತಹ ಅನ್ಯಾಯವನ್ನು ಮಾಡುತ್ತಿರುವ ಈಕೆಯನ್ನು ತಡೆಯಬಾರದಿತ್ತೆ?" ಮಾಲವಿಕೆ ಭಯಪಡುವಳು. ದೇವಿಯ ನಿಯೋಗ ಪ್ರಕಾರ ಹೀಗೆ ಮಾಡಿದುದರಿಂದ ಭರ್ತೃವು ಕ್ಷಮಿಸಬೇಕೆಂದು ಬಕುಲಾವಲಿಕೆ ಮಾಲವಿಕೆಯೊಡನೆ ಅರಸನ ಪಾದಗಳಿಗೆರಗುತ್ತಾಳೆ. ರಾಜನು ಕೈಹಿಡಿದು ಎಳಿಸುತ್ತಾ, "ಹೇ ವಿಲಾಸಿನಿ, ವಾಮೋರು, ಕೆಂದಳಿರಿನಂತೆ ಕೋಮಲವಾಗಿದ್ದು ಕಠಿಣವಾದ ಮರದ ಮೇಲಿರಿಸಿದ ನಿನ್ನ ಎಡಗಾಲಿಗೆ

ಬಾಧೆಯಾಗಿಲ್ಲವಷ್ಟೆ?” ಎಂದು ವಿನೋದಪೂರ್ವಕವಾಗಿ ಪ್ರಶ್ನಿಸುವನು. ಮಾಲವಿಕೆ ಲಜ್ಜೆಯನ್ನು ತೋರುವಳು. ಸಖಿಯೊಡನೆ ‘ಹೋಗೋಣ’ ಎನ್ನಲು, ನಿಪುಣೆಯಾದ ಬಕುಲಾವಲಿಕೆ ರಾಜನ ಅನುಮತಿಯನ್ನು ಕೇಳು ವಂತೆ ಹೇಳುವಳು. ಹೋಗುವ ಮುನ್ನ ತನ್ನ ಈ ಕೇಳಿಕೆಯನ್ನು ಮನ್ನಿಸ ಬೇಕೆಂದು ರಾಜನು ಬೇಡುವನು—“ಚಿರಕಾಲದಿಂದ ಧೃತಿಪುಷ್ಪವನ್ನೀಕನು ಬಿಡದಿದ್ದುದರಿಂದ ನಿನ್ನ ಸ್ಪರ್ಶಾಮೃತದಿಂದ ಬಯಕೆಯನ್ನು ಪೂರೈಸು.”

ಇದನ್ನೆಲ್ಲಾ ನೋಡುತ್ತಿದ್ದ ಇರಾವತಿಗೆ ಇನ್ನು ಸಹಿಸಲಾಗುವುದಿಲ್ಲ. ಅವಳು ಥಕ್ಕನೆ ಮುಂದಕ್ಕೆ ಬರಲು, ಎಲ್ಲರೂ ದಿಗ್ಭ್ರಾಂತರಾಗುವರು. ರಾಜನು ಮುಂಗಾಣದಾಗುವನು. ಮಾಲವಿಕೆ ಬಕುಲಾವಲಿಕೆಯರಿಬ್ಬರೂ ರಾಜನ ಪ್ರೇಮವ್ಯಾಪಾರಗಳಲ್ಲಿ ಕೈಹಾಕಲು ನಾವು ಯಾರು ಎಂದು ಕೊಂಡು ಹೊರಟುಹೋಗುವರು. “ಪುರುಷರು ಎಂದಿಗೂ ವಿಶ್ವಾಸಾರ್ಹ ರಲ್ಲ; ಬೇಡರ ಗೀತದಿಂದ ಮನಸೋತ ಜಿಂಕೆಯಂತೆ ಇದುವರೆಗೆ ನನಗೆ ಈ ವಿಷಯ ತಿಳಿದಿರಲಿಲ್ಲ” ಎಂದು ಇರಾವತಿ ದುಃಖಿಸುವಳು. “ಏನಾದರೂ ಉತ್ತರ ಕೊಡು; ಕಳ್ಳನಾಗಿ ಸಿಕ್ಕಿಬಿದ್ದಿರಲು ಗೋಡೆ ಕೊರೆಯುವ ವಿದ್ಯೆ ಯನ್ನು ಅಭ್ಯಸಿಸುತ್ತಿರುವೆನೆಂದಾದರೂ ಹೇಳಬೇಕು” ಎಂದು ವಿದೂಷಕನು ಪ್ರೇರಿಸುವನು. “ನನಗೆ ಮಾಲವಿಕೆಯಿಂದೇನೂ ಇಲ್ಲ; ನೀನು ಬರಲು ತಡಮಾಡಿದೆಯೆಂದು ಹೀಗೆಯೇ ವಿನೋದಿಸಿದೆ” ಎಂದು ಅರಸನು ಹೇಳು ವನು. “ಇಂತಹ ವಿನೋದವಸ್ತು ತಮಗೆ ಸಿಕ್ಕಿದೆಯೆಂದು ಇದುವರೆಗೆ ನಾನು ತಿಳಿದಿರಲಿಲ್ಲ. ಹಾಗೆ ತಿಳಿದಿದ್ದರೆ ಈ ರೀತಿ ಮಧ್ಯದಲ್ಲಿ ಬಂದು ತೊಂದರೆಕೊಡುತ್ತಿರಲಿಲ್ಲ” ಎಂದು ಇರಾವತಿ ವಕ್ರೋಕ್ತಿಯನ್ನಾಡುವಳು. “ಏನು, ದಾಸಿಯರೊಡನೆ ಮಾತನಾಡುವುದೂ ಒಂದು ಅಪರಾಧವೇ?” ಎಂದು ವಿದೂಷಕನೂ ರಾಜನ ಸಹಾಯಕ್ಕೆ ಬರುವನು. ಆದರೆ ಇರಾ ವತಿಯ ಮನಸ್ಸಿನ ಮೇಲೆ ಯಾವ ಮಾತು ಪರಿಣಾಮವನ್ನುಂಟುಮಾಡ ಲಾರದಾಗುವುದು. ತನ್ನ ಪಾದಗಳಿಗೆ ಬಿದ್ದ ರಾಜನನ್ನು ಕೂಡ ತಿರಸ್ಕರಿಸಿ ಅಸೂಯೆಯಿಂದಲೂ ಕ್ರೋಧದಿಂದಲೂ ಸಂತಪ್ತಳಾಗಿ ಆಕೆ ಹೊರಟು ಹೋಗುವಳು. ಅವಳ ಪ್ರೇಮವನ್ನು ಅಲ್ಲಗಳೆಯುವುದಕ್ಕೆ ಒಳ್ಳೆಯ ನೆಪ ಸಿಕ್ಕಿತೆಂದು ಗೆಳೆಯರಿಬ್ಬರೂ ಸಮಾಧಾನಪಟ್ಟುಕೊಳ್ಳುವರು.

[ನಂಬ್ರ 228ನೇ ಪುಸ್ತಕ, ಭಾಗ ೨ರಲ್ಲಿ ಪೂರ್ಣಗೊಳ್ಳುವುದು.]

Edited, Printed & Published by K. V. Shenoy
at The Prabhat Printers, Ltd., Mangalore.